# ಕರ್ನಾಟಕ ವಿಧಾನ ಪರಿಷತ್ತು.

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 1245 |
| 2. | ಸದಸ್ಯರ ಹೆಸರು | : | ಶ್ರೀ ಬಿ.ಜಿ.ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ) |
| 3. | ಉತ್ತರಿಸಬೇಕಾದ ದಿನಾಂಕ | : | 21-12-2018. |
| 4. | ಉತ್ತರಿಸುವ ಸಚಿವರು | : | ಮಾನ್ಯ ವಸತಿ ಮತ್ತು ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿಭಾಗೀಯ ಕೇಂದ್ರವಾಗಿರುವ ಕಲಬುರಗಿಗೆ ನೀರು ಸರಬರಾಜು ಮಾಡುವ ಮೂಲಗಳೆಷ್ಟು? (ವಿವರ ನೀಡುವುದು). | ಬೆಣ್ಣೆತೊರ ಜಲಾಶಯ ಮತ್ತು ಭೀಮಾ ನದಿಯ ಮೂಲಗಳಿಂದ ಕಲಬುರಗಿ ನಗರಕ್ಕೆ ಪ್ರಾತ್ಯಕ್ಷಿಕ ವಲಯದ ವಾರ್ಡ್ ಸಂಖ್ಯೆ: 17, 23, 44, 33 (ಪೂರ್ಣ ಪ್ರದೇಶಗಳಿಗೆ) ಹಾಗೂ 24, 6, 19, 32, 42, 43 & 49 (ಭಾಗಶಃ ಪ್ರದೇಶಗಳಲ್ಲಿ) ನಿರಂತರ 24/7 ನೀರು ಸರಬರಾಜು ಕಾರ್ಯಾಚರಣೆ ಮತ್ತು ನಿರ್ವಹಣೆಯಡಿ ನೀರು ಸರಬರಾಜು ಮಾಡಲಾಗುತ್ತಿದೆ. |
| ಆ) | ಈ ಮೂಲಗಳಿಂದ ನಗರಕ್ಕೆ ಎಷ್ಟು ದಿನಗಳಿಗೊಮ್ಮೆ ನೀರು ಸರಬರಾಜು ಮಾಡಲಾಗುತ್ತಿದೆ; (ಸಮಗ್ರ ಮಾಹಿತಿ ನೀಡುವುದು). | ನಗರದ 55 ವಾರ್ಡ್‌ಗಳಲ್ಲಿ 4 ವಾರ್ಡಗಳಿಗೆ ಪೂರ್ಣವಾಗಿ (ವಾರ್ಡ್ ಸಂಖ್ಯೆ 17,23,33,44) ಮತ್ತು 7 ವಾರ್ಡಗಳಿಗೆ ಭಾಗಃಶ (ವಾರ್ಡ ಸಂಖ್ಯೆ 6,19,24,32,42,43 ಮತ್ತು 49) ನಿರಂತರ ನೀರು ಪೂರೈಸಲಾಗುತ್ತಿದೆ. ಉಳಿದ 44 ವಾರ್ಡಗಳಿಗೆ 3 ರಿಂದ 5 ದಿವಸಕ್ಕೊಮ್ಮೆ ನೀರು ಸರಬರಾಜು ಮಾಡಲಾಗುತ್ತಿದೆ. ವಿವರ ಈ ಕೆಳಗಿನಂತೆ ಇರುತ್ತದೆ:<br><br>**1)** 17 ವಾರ್ಡ್‌ಗಳಲ್ಲಿ 9 ವಾರ್ಡ್‌ಗಳಿಗೆ ಪೂರ್ಣವಾಗಿ 8 ವಾರ್ಡ್‌ಗಳಿಗೆ ಭಾಗಶ: (ವಾರ್ಡ ಸಂಖ್ಯೆ 1(ಭಾ), 2(ಭಾ), 4,5(ಭಾ), 6(ಭಾ), 9(ಭಾ), 10, 16(ಭಾ), 18,19,22, 32,38(ಭಾ), 48(ಭಾ) 53,54, ಮತ್ತು 55, 3 ದಿನಕ್ಕೊಮ್ಮೆ ಪೂರೈಸಲಾಗುತ್ತಿದೆ.<br><br>**2)** 28 ವಾರ್ಡ್‌ಗಳಲ್ಲಿ 23 ವಾರ್ಡ್‌ಗಳಿಗೆ ಪೂರ್ಣವಾಗಿ 5 ವಾರ್ಡ್‌ಗಳಿಗೆ ಭಾಗಶಃ (ವಾರ್ಡ್ ಸಂಖ್ಯೆ 2(ಭಾ), 11(ಭಾ), 12, 13, 14, 15(ಭಾ), 20, 21, 27(ಭಾ) 28, 29, 30, 33, 34, 35, 36, 37, 38, 39, 40, 41, 42, 45(ಭಾ), 46, 49, 50, 51 ಮತ್ತು 52) ಗಳಿಗೆ 4 ದಿನಕ್ಕೊಮ್ಮೆ ನೀರು ಪೂರೈಸಲಾಗುತ್ತಿದೆ.<br><br>**3)** 21 ವಾರ್ಡ್‌ಗಳಲ್ಲಿ 12 ವಾರ್ಡ್‌ಗಳಿಗೆ ಪೂರ್ಣವಾಗಿ 9 ವಾರ್ಡ್‌ಗಳಿಗೆ ಭಾಗಶಃ (ವಾರ್ಡ್ ಸಂಖ್ಯೆ 1(ಭಾ), 3,5(ಭಾ), 7,8, 9(ಭಾ), 11(ಭಾ), 15(ಭಾ), 16(ಭಾ), 17, 23, 24, 25,26, 27(ಭಾ), 31, 43, 44, 45(ಭಾ), 47, 48(ಭಾ), ಗಳಿಗೆ 4/5 ದಿನಕ್ಕೊಮ್ಮೆ ನೀರು ಪೂರೈಸಲಾಗುತ್ತಿದೆ. |

| | | |
|---|---|---|
| ಇ) | ಕೆಲವು ದಿನಗಳಿಂದ ಅಸಮರ್ಪಕ, ಅನಿಯಮಿತ ನೀರು ಸರಬರಾಜು ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾರಣಗಳೇನು; (ವಿವರ ನೀಡುವುದು). | ಕೊಳವೆ ಮಾರ್ಗದಲ್ಲಿನ ಸೋರುವಿಕೆ/ವಿದ್ಯುತ ಅಡಚಣೆ/ ಮೋಟಾರ ದುರಸ್ತಿ ಹಾಗೂ ತಾಂತ್ರಿಕ ತೊಂದರೆಯಿಂದ ಕೆಲವೊಂದು ಅವಧಿಯಲ್ಲಿ ನಿಯಮಿತ ನೀರು ಸರಬರಾಜು ಮಾಡಲು ಆಗಿರುವದಿಲ್ಲ. ಅವುಗಳನ್ನು ಸರಿಪಡಿಸಿಕೊಂಡು ನಿಯಮಿತವಾಗಿ ನೀರು ಸರಬರಾಜು ಮಾಡಲು ಕ್ರಮ ಕೈಗೊಳ್ಳಲಾಗಿದೆ. |
| ಈ) | ಕಲಬುರಗಿಯ ಕುಡಿಯುವ ನೀರಿನ ಸಮಸ್ಯೆಗೆ ಶಾಶ್ವತ ಪರಿಹಾರ ಒದಗಿಸುವುದಕ್ಕಾಗಿ ಯೋಜನೆ ರೂಪಿಸಲಾಗಿದೆಯೇ? (ಸಮಗ್ರ ಮಾಹಿತಿ ನೀಡುವುದು). | 1. ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ (KUWSMP) ಯಡಿ ಕಲಬುರಗಿ ನಗರಕ್ಕೆ 24/7 ನಿರಂತರ ನೀರು ಸರಬರಾಜು ವ್ಯವಸ್ಥೆ ಕಲ್ಪಿಸುವ ಯೋಜನೆಗೆ ಸರ್ಕಾರಿ ಆದೇಶ ಸಂಖ್ಯೆ: ನಅಇ 244 ಪಿಆರ್‌ಜೆ 2013, ಬೆಂಗಳೂರು ದಿನಾಂಕ:07.11.2013 ರಂತೆ ರೂ.489.00 ಕೋಟಿಗಳನ್ನು ನಿಗಧಿಪಡಿಸಲಾಗಿದೆ.<br><br>2. ಈಗಾಗಲೇ ಕಲಬುರಗಿ ನಗರಕ್ಕೆ ಪ್ರಾತ್ಯಕ್ಷಿಕ ವಲಯದ ವಾರ್ಡ್ ಸಂಖ್ಯೆ: 17, 23, 44, 33 (ಪೂರ್ಣ ಪ್ರದೇಶಗಳಿಗೆ) ಹಾಗೂ 24, 6, 19, 32, 42, 43 & 49 (ಭಾಗಶಃ ಪ್ರದೇಶಗಳಲ್ಲಿ) ನಿರಂತರ 24/7 ನೀರು ಸರಬರಾಜು ಕಾರ್ಯಾಚರಣೆ ಮತ್ತು ನಿರ್ವಹಣೆ ಮಾಡಲಾಗುತ್ತಿದೆ.<br><br>3. ಸದರಿ ಯೋಜನೆಗೆ ಆಪರೇಟರ್‌ರವನ್ನು ಗೊತ್ತುಪಡಿಸಲು ಈಗಾಗಲೇ 2 ಭಾರಿ ಟೆಂಡರ್ ಕರೆಯಲಾಗಿದ್ದು, ಮೊದಲನೇ ಬಾರಿ ಆಹ್ವಾನಿಸಲಾಗಿದ್ದ ಬಿಡ್‌ಗೆ ಒಬ್ಬರೇ ಬಿಡ್‌ದಾರರು ಭಾಗವಹಿಸಿದ್ದು, ತುಲಾನಾತ್ಮಕವಾಗಿ ಪರಿಶೀಲಿಸಿದಾಗ ಅಂದಾಜು ವೆಚ್ಚಕ್ಕಿಂತ ಹೆಚ್ಚಾಗಿ ನಮೂದಿಸಿರುವುದರಿಂದ, ಸದರಿಯವರ ಬಿಡ್‌ನ್ನು ತಿರಸ್ಕರಿಸಲಾಗಿರುತ್ತದೆ ಹಾಗೂ 2ನೇ ಕರೆಯಲ್ಲಿ ಯಾವುದೇ ಬಿಡ್‌ದಾರರು ಭಾಗವಹಿಸಿರುವುದಿಲ್ಲ.<br><br>ಸದರಿ ಗುತ್ತಿಗೆ ಮಾದರಿಯನ್ನು ಮಾರ್ಪಡಿಸಿ Design-Build-Operate-Transfer(DBOT) ಮಾದರಿಯಲ್ಲಿ ಟೆಂಡರ್ ಆಹ್ವಾನಿಸಲು ಸರ್ಕಾರವು ಸರ್ಕಾರದ ಆದೇಶ ಸಂಖ್ಯೆ: ನಅಇ 279 ಪಿಆರ್‌ಜೆ 2018, ಬೆಂಗಳೂರು ದಿನಾಂಕ: 22.10.2018 ರಲ್ಲಿ ಅನುಮೋದನೆ ನೀಡಲಾಗಿರುತ್ತದೆ ಅದರಂತೆ, ಪರಿಷ್ಕೃತ ಬಿಡ್ ದಸ್ತಾವೇಜುಗಳನ್ನು ವಿಶ್ವಬ್ಯಾಂಕಿಗೆ ಸಲ್ಲಿಸಲಾಗಿದ್ದು, ಬಿಡ್ ದಸ್ತಾವೇಜುಗಳ ಪರಿಷ್ಕರಣೆ ಪ್ರಕ್ರಿಯೆ ಪ್ರಗತಿಯಲ್ಲಿದೆ. |

ನಅಇ 438 ಪಿಆರ್‌ಜೆ 2018

( ಯು.ಟಿ. ಖಾದರ್ )
ವಸತಿ ಮತ್ತು ನಗರಾಭಿವೃದ್ಧಿ ಸಚಿವರು